# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 2002 |
| ಮಾನ್ಯ ಸದಸ್ಯರ ಹೆಸರು | ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 24.03.2021 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ನೇಮಕಾತಿ ಪ್ರಾಧಿಕಾರಿಗಳು ಹಿಂದುಳಿದ ವರ್ಗಗಳಿಗೆ ಸರ್ಕಾರ ನಿಗಧಿಪಡಿಸಿರುವ ಮೀಸಲಾತಿ ಪ್ರಕಾರ ಆಯಾ ವರ್ಗಗಳಿಗೆ ಮೀಸಲಾತಿ ನೀಡಿರುವ ಬಗ್ಗೆ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ತನಿಖೆ ಮಾಡಲು ಪ್ರತ್ಯೇಕ ವಿಭಾಗವಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಹಿಂವಕ 313 ಬಿಸಿಎ 2015 ದಿನಾಂಕ: 17.03.2016ರ ಆದೇಶದನ್ವಯ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಆಯುಕ್ತಾಲಯದಲ್ಲಿ ಮಾರ್ಗದರ್ಶನ ಮತ್ತು ಉದ್ಯೋಗ ಜಾರಿ ಕೋಶವನ್ನು ಪ್ರಾರಂಭಿಸಲಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಲ್ಲಿ ಎಷ್ಟು ಘಟಕ ಕಛೇರಿಗಳನ್ನು ತಪಾಸಣೆ ಮಾಡಲಾಗಿದೆ (ವರ್ಷವಾರು ವಿವರಗಳನ್ನು ನೀಡುವುದು) | • 2018-19 ನೇ ಸಾಲಿನಲ್ಲಿ ಒಟ್ಟು 35 ವಿವಿಧ ಘಟಕ ಕಛೇರಿ/ನೇಮಕಾತಿ ಪ್ರಾಧಿಕಾರಗಳನ್ನು ತಪಾಸಣೆ ಮಾಡಲಾಗಿರುತ್ತದೆ.<br>• 2019-20ನೇ ಸಾಲಿನಲ್ಲಿ ಒಟ್ಟು 04 ಘಟಕ ಕಛೇರಿಯನ್ನು ತಪಾಸಣೆ ಕೈಗೊಳ್ಳಲಾಗಿರುತ್ತದೆ.<br>• 2020-21 ನೇ ಸಾಲಿನಲ್ಲಿ ಕೋವಿಡ್-19 ಹಿನ್ನೆಲೆಯಲ್ಲಿ ಯಾವುದೇ ಘಟಕ ಕಛೇರಿಗಳನ್ನು ತಪಾಸಣೆ ಕೈಗೊಂಡಿರುವುದಿಲ್ಲ. |
| ಇ) | ಯಾವ ಯಾವ ಇಲಾಖೆಗಳಲ್ಲಿ ಮೀಸಲಾತಿ ವಿಚಲನೆ ಆಗಿದೆ; ಅವರ ಮೇಲೆ ಕೈಗೊಂಡಿರುವ ಕ್ರಮಗಳೇನು; | ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ವರದಿಸಿರುವಂತೆ, ತಪಾಸಣೆ ಮಾಡಿರುವ ಘಟಕ ಕಛೇರಿ/ನೇಮಕಾತಿ ಪ್ರಾಧಿಕಾರಗಳಲ್ಲಿ ಮೀಸಲಾತಿ ವಿಚಲನೆಯಾಗಿರುವುದು ಕಂಡುಬಂದಿರುವುದಿಲ್ಲ. |
| ಈ) | ಇಲಾಖೆ ಆಯುಕ್ತರು ಮೀಸಲಾತಿ ಬಗ್ಗೆ ಎಷ್ಟು ಘಟಕ ಕಛೇರಿಗಳನ್ನು ಪರಿಶೀಲನೆ ಮಾಡಿರುತ್ತಾರೆ; ಮಾಡದಿದ್ದಲ್ಲಿ ಕಾರಣವನ್ನು ತಿಳಿಸುವುದು. | ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ನೇತೃತ್ವದಲ್ಲಿ ಮಾರ್ಗದರ್ಶನ ಮತ್ತು ಉದ್ಯೋಗ ಜಾರಿ ಕೋಶವನ್ನು ಸ್ಥಾಪಿಸಲಾಗಿದ್ದು, ಜಿಲ್ಲಾ ಹಿಂದುಳಿದ ವರ್ಗಗಳ ಕಲ್ಯಾಣಾಧಿಕಾರಿಗಳು ಜಿಲ್ಲಾ ಹಂತದಲ್ಲಿ ಘಟಕ ಕಛೇರಿಗಳನ್ನು ತಪಾಸಣೆ ಕೈಗೊಂಡಿರುತ್ತಾರೆ. |

ಸಂಖ್ಯೆ: ಹಿಂವಕ 92 ಬಿಸಿಎ 2021

(ಕೋಟ ಶ್ರೀನಿವಾಸ ಪೂಜಾರಿ)
ಮುಜರಾಯಿ ಮತ್ತು ಹಿಂದುಳಿದ ವರ್ಗಗಳ